# 77

# ಜಾತಕಪಠನ

ಮತ್ತು

# ಇತರ ಕಥೆಗಳು

ಕತೆಗಾರರು:

ಕುಡ್ಪಿ ವಾಸುದೇವ ಶೆಣೈ

ಮೂರು ಕಥೆಗಳು:

೧. ಜಾತಕಪಠನ  ೨. ಮಾಂಸಭಕ್ಷಕ ವಾಸಯ್ಯ

೩. ಮರೆವು

1956.

ಒಂದಾಣ್




ಮಾಲೆ

# 'ಒಂದಾಣೆ ಮಾಲೆ'ಯ ಪ್ರಕಟಣೆಗಳು:

೧. *ಕೆಪ್ಪಟಿರಾಯ (ವಿನೋದ ಕಥೆ)
೨. *ಸಾರೀಶ್ವರರು (ಏಕಾಂಕ ಪ್ರಹಸನ)
೩. ಕಳ್ಳನಿಗೆ ಸಂಭಾವನೆ (ದ್ವಿ. ಮುದ್ರಣ)
೪. *ಸದ್ರಿಸುಬ್ಬ (ಏಕಾಂಕ ಪ್ರಹಸನ)
೫. ಅದ್ಭುತ ತ್ಯಾಗ (ದ್ವಿತಿಯ ಮುದ್ರಣ)
೬. *ಚುನಾವಣೆ ಅರ್ಥಾತ್ ಬನಾವಣೆ
೭. *'ಬೀಡಿ ಸೇದಬೇಡಿ' ಮತ್ತು 'ಆ ಮಗು'
೮. *ಇಂಗ್ಲಿಷ್-ಕನ್ನಡ ಅರ್ಥಕೋಶ
೯. *ಲಂಚಕ್ಕೆ ಸಂಚಕಾರ
೧೦. *ಟಿಶ್ಯೂ ಔಷಧಿಗಳ ಕೈಪಿಡಿ.
೧೧. ಶ್ರೀಕ್ಷೇತ್ರ ಧರ್ಮಸ್ಥಳ (ತೃ. ಮುದ್ರಣ)
೧೨. ಜೀವದ ಮೌಲ್ಯ ಮತ್ತು ಇತರ ಕಥೆಗಳು
೧೩. ಸತ್ತವನ ಸೇಡು ಮತ್ತು ಇತರ ಕಥೆಗಳು
೧೪. *ವೆಂಕಟನ ಸಂಕಟ (ಏಕಾಂಕ ಪ್ರಹಸನ)
೧೫. ಬಾಬಿಗೆ ಬಾಸಿಂಗ (ದ್ವಿತೀಯ ಮುದ್ರಣ)
೧೬. ವೇಣೂರಿನ ಗತವೈಭವ (ದ್ವಿ. ಮುದ್ರಣ)
೧೭. ಒಗಟುಗಳು [ದ್ವಿತೀಯ ಮುದ್ರಣ]
೧೮. ಜಗಳಗಂಟ ಮತ್ತು ಇತರ ಕಥೆಗಳು
೧೯. ರಥೋತ್ಸವ.
೨೦. ಕರಿನಾಯಿ ಮತ್ತು ಮುಪ್ಪು
೨೧. ಭಾರತದ ಮಹಾನಗರ (ದ್ವಿ. ಮುದ್ರಣ)
೨೨. *ತಿರುಕ್ಕುರಲ್
೨೩. ಸೂರ್ಯನ ಸಂಸಾರ
೨೪. ಭಾರತದ ಮಹಾನಗರ (ದ್ವಿ ಮುದ್ರಣ)
೨೫. ಧೈರ್ಯ ಮತ್ತು ಇತರ ಸತ್ಯಕಥೆಗಳು.
೨೬. *ವಾಮಾವತಾರ
೨೭. ಹಾಸವಿಲಾಸ (ನಗೆಹನಿಗಳು)
೨೮. *ಸತ್ಯವಂತ ಬಾಜಿ (ಏಕಾಂಕ ಪ್ರಹಸನ)
೨೯. ಜಾಣ್ಮೆಯ ಒಗಟುಗಳು
೩೦. ಜಾತಕ ಕಥೆಗಳು
೩೧. ಕಾರ್ಕಳದ ಚರಿತ್ರೆ
೩೨. ಮರ್ಜಿ (ಏಕಾಂಕ ಪ್ರಹಸನ)
೩೩. ದರ್ಶನದ ಕಥೆಗಳು
೩೪. ಅಳುವಿನ ಹೊಳೆ ಮತ್ತು ಕೇಶವಭೂಪ
೩೫. ಶರಾಬಿನ ಸಿಪಾಯಿಗಳು
೩೬. ಉಪದೇಶ ಶತಕ
೩೭. ನಿಮಗೆ ಗೊತ್ತಿದೆಯೇ?
೩೮. ಚತುರ ಚಮತ್ಕಾರ
೩೯. ಸತೀ ಸಾವಿತ್ರಿ [
೪೦. ಆಭರಣಗಳ ಪೆಟ್ಟಿಗೆ, ಮತ್ತು
೪೧. ಭಾರತದ ಮಂತ್ರಿಮಂಡಲಗಳ
೪೨. ಕಾಲುಬಳೆಯ ಕಥೆ [ವ
೪೩. ಭಾರತದ ನಾಲ್ಕು ಕಲಶಗಳು
೪೪. ವ್ಯಸನದಿಂದ ಲಾಭ ಮತ್ತು ಇತ
೪೫. ಸುಭಾಷಿತ [
೪೬. ೧೮೫೭ರ "ಸಿಪಾಯಿ ದಂಗೆ"
೪೭. ಅಕಾಂಡ ತಾಂಡವ (ರೇಡಿಯೋ
೪೮. ಸಾಹಸದ ಕಥೆಗಳು
೪೯. ಸಂಜ್ಞಾ ಜ್ಞಾನ ಕೋಶ
೫೦. ಪಂಡಿತನ ಪಿಟೀಲು
೫೧. ಭೋಗಯಾತ್ರೆ
೫೨. ಸಂಗ್ರಾಮಸಿಂಹ
೫೩. ಧರ್ಮ ಶಿಕ್ಷಾ
೫೪. ಮಹಾತ್ಮ
೫೫. ಮೀರಾಬಾಯಿ (ಏಕಾಂಕ ನಾಟ
೫೬. ವೀರರಮಣಿ ಕರ್ಮದೇವಿ
೫೭. ಅರಳಿದ ನಗು
೫೮. ಸಚಿತ್ರ ಜಪಾನ್
೫೯. ಚುಟ್ಟ ಬಿಟ್ಟ ಧಿಟ್ಟ (ಏಕಾಂಕ ಪ್ರಹ
೬೦. ನಿರಪರಾಧಿ
೬೧. ಭಕ್ತವಾಣಿ
೬೨. ಜಾನಪದ ಸಾಹಿತ್ಯ
೬೩. ಡಾಕ್ಟರ್ ಆರೋಗ್ಯಮ್
೬೪. ಲೌಕಿಕ ನ್ಯಾಯಗಳು
೬೫. ಶಿಶುಪಾಲ ಮಾನಭಂಗ
೬೬. ಜರಾಸಂಧ ವಧೆ
೬೭. ಜವಾಹರಲಾಲರ ಜೀವನ ಚರಿ
೬೮. ಕರುಣೆ ಮತ್ತು ಇತರ ಕಥೆಗಳ
೬೯. ಶ್ರೀಕ್ಷೇತ್ರ ಉಡುಪಿ
೭೦. ವಿನೋದ ವಿಹಾರ
೭೧. ಭಾರತದ ಗತವೈಭವ
೭೨. ಸತ್ಯ ಹರಿಶ್ಚಂದ್ರ
೭೩. ಸೂಕ್ತಿಗಳು.
೭೪. ಉ. ಕ. ದ ಯಕ್ಷಗಾನ ಕಲಾವಿ
೭೫. ದೇವರ ಸಾಮ್ರಾಜ್ಯದಲ್ಲಿ...
೭೬. ಕ್ರಾಂತಿಕಠೀರವ ಭಗತ್ ಸಿಂ
೭೭. ಜಾತಕಪಠನ ಮತ್ತು ಇತರ ಕ

* ಈ ಗುರುತು ಹಾಕಿದ ಪುಸ್ತಕಗಳ ಪ್ರತಿಗಳು ಮುಗಿದಿವೆ.

# ಜಾತಕಪಠನ

## ಮತ್ತು

## ಇತರ ಕಥೆಗಳು



## ೧. ಜಾತಕಪಠನ

ನನ್ನ ಗೆಳೆಯರ ಕೂಟದೊಳಗಿನ ಮುತ್ತಿನಂಥ ಒಂದು ಜೀವ—ಕೇಣು,–'ಶಿಬ್ಬಣ್ಣ'ಎಂಬ ಹೆಸರಿನ ರತ್ನವನ್ನು ಆಕಸ್ಮಿಕವಾಗಿ ನನ್ನ ಮುಂದಿರಿಸಿ, ಕ್ರಯ ಏರಿಸಲು ಆರಂಭಿಸಿದನು:

"ನನ್ನ ಆತ್ಮಾ! ಶಿಬ್ಬಣ್ಣರಾಯರೆಂದರೆ ಇವರೇ. ಜಾತಕ ನೋಡಿ ಹೇಳುವುದರಲ್ಲಿ ದಕ್ಷಿಣ ಭಾರತದಲ್ಲಿ ಹೆಸರಾದ ಪಂಚರಲ್ಲಿ ಇವರೂ ಒಬ್ಬರು. ಪರ್ಲಕಿಮಿಡಿ, ಬೊಬ್ಬಿಲಿ, ಕೊಚ್ಚಿ, ಕೋಳಿಕೋಡು ಮುಂತಾದ ಹಲವು ರಾಜ್ಯಗಳ ಪ್ರಸಿದ್ಧ ನೃಪತಿಗಳನ್ನು ದಂಗುಬಡಿಸಿರುವರು. ನಿನಗೆ ಜಾತಕಗಳಲ್ಲಿ ವಿಶ್ವಾಸವೇ ಇಲ್ಲವೆಂದು ಆಗಾಗ್ಗೆ ಹೇಳುತ್ತಿರುವೆ. ಈ ರಾಜ್ಯದ ಈ ವಿಭಾಗದಲ್ಲಿ ಬ್ರಿಟಿಷರ ಆಳ್ವಿಕೆಯಿಂದ ಹಿಂದೂದೇಶಕ್ಕುಂಟಾದ ಪ್ರಯೋಜನಗಳನಂತರ ಪುನಃ ಜನತಾರಾಜ್ಯದಲ್ಲಿ ಜನತಾಸರಕಾರದಿಂದ ಉಂಟಾದ ಪ್ರಯೋಜನಗಳಲ್ಲಿ ಸಿರಿಯಾ ಅಣೆಕಟ್ಟು, ಕೂಳೂರು ಮೊದಲಾದ ಸಂಕಗಳು ಅಲಕ್ಷಣೀಯವಲ್ಲವಾದರೂ—ಇವರೊಬ್ಬರು ಆ ಮಹಾರಾಜರುಗಳ ಒತ್ತಾಯದ ಪಾಶಗಳಿಂದ ಹೇಗೂ ತಪ್ಪಿಸಿಕೊಂಡು, ಈಗ ಕೆಲವೇ ದಿನಗಳ ಬಗ್ಗೆ ಇಲ್ಲಿಗೆ ಬಂದ ಪ್ರಯೋಜನವೊಂದು ಚರಿತ್ರಾರ್ಹವಾದುದೆನ್ನುವಾಗ, ಒಂದು ಶತಮಾನದಲ್ಲಿ ಇಂತಹ ಒಂದೇ ಸಂದರ್ಭವು ಕೆಲವೇ ಮಂದಿಗೆ ದೊರೆಯುವುದೆಂದು ಖಂಡಿತವಾಗಿ ಹೇಳ............" ಎನ್ನುತ್ತ ವಿರಾಮ—ಅರ್ಧ ವಿರಾಮ—ಪೂರ್ಣ ವಿರಾಮ—ಆಶ್ಚರ್ಯ ಚಿಹ್ನೆ—ಪ್ರಶ್ನಾರ್ಥಕ ಚಿಹ್ನೆ ಮೊದಲಾದ ಯಾವ ಚಿಹ್ನೆಗಳ ಪ್ರಯೋಗಕ್ಕೂ ಎಡೆ ದೊರೆಯದೆ ಚಡಪಡಿಸುತ್ತಿರಲು,—

"ಸಂತೋಷ—ಕುಳಿತುಕೊಳ್ಳಬೇಕು—ಚಹವೇ ಕಾಫಿಯೇ ಶರ್ಬತೇ ಬರೀ ನೀರೇ?" ಎಂದು ಉಪಚರಿಸಿದೆ.

ಜ್ಯೋತಿಷಕುಲತಿಲಕಚೂಡಾಮಣಿ ಶಿಬ್ಬು, ಮಂಜಿಯ ಸೋಗೆಯ ಆಕಾರದ ಭಯಾನಕನಾಸಿಕವನ್ನು ಬಲಮುಷ್ಟಿಯಿಂದ ಉಜ್ಜಿ, ಪಟಪಟನೆ ಬಡಿದು ಪುನಃ ಉಜ್ಜಿ, ದೊರಗು ನೆಲದ ಮೇಲಿಂದ ಭಾರದ ಕುರ್ಚಿಯನ್ನೆಳೆದಂತೆ ನಾಸಿಕನಾದ ಹೊರಡಿಸಿ, ಹೇಳಿದನು. "(೧) ತಮ್ಮ ಜಾತಕದ ಪ್ರತಿ (೨) ಒಂದು ಹಾಳೆ ಕಾಗದ (೩) ಪೆನ್ಸಿಲು (೪) ಎರಡು ಕಪ್ ಚಹಾ (೫) 'ನಾಸಿಕ ಫ್ರೇಂಡ್' ನಸ್ಯ ಒಂದು ತೊಲೆ—ಇಷ್ಟನ್ನು ತನ್ನಿರಿ".

ತಂದಾಯಿತು. ಶಿಬ್ಬು, ಚಹವನ್ನು ಹೀರಿ, ನಸ್ಯ ಸೇದಿ, ನಾಸಿಕವನ್ನು ಘಟಲ್ಲೆಂದು ಬಡೆದು ಕೈಯುಜ್ಜಿ, ಅರಳಿದ ಕಣ್ಣುಗಳನ್ನು ಅರೆಮುಚ್ಚಿ, ಪೆನ್ಸಿಲ್ ಎತ್ತಿ ನನ್ನ 'ಸು' ಮತ್ತು 'ದುಃ' ದೈವಗಳೊಡನೆ ಕಾಳಗಕ್ಕಿಳಿದನು.

"ನೀವು"—ಶಿಬ್ಬು ಜಾತಕದ ಪ್ರತಿಯನ್ನು ನೋಡಿ, ಲೆಕ್ಕಹಾಕುತ್ತ ನನಗೆ ಹೇಳಲಾರಂಭಿಸಿದನು—"ಹುಟ್ಟಿದ ಸಮಯವು ಮಧ್ಯಾಹ್ನ ಕಾಲ. ಎಲ್ಲೆಲ್ಲೂ ಸೂರ್ಯಪ್ರಕಾಶ............ಈ ದೃಶ್ಯವು ಚಲೋದು."

"ಸರಿ" ಎಂದೆ.

"ನಿಮ್ಮ ಮನೆಯ ಎಡ ದಿಕ್ಕಿನಲ್ಲಿ ದೇವಸ್ಥಾನವಿದ್ದಿರಬೇಕು."

"ನಮ್ಮೂರಿನಲ್ಲಿ ದೇವಸ್ಥಾನವನ್ನು ತಪ್ಪಿಸಿ ಯಾವ ದಿಕ್ಕಿನಲ್ಲಿಯೂ ಮನೆಕಟ್ಟಲು ಸಾಧ್ಯವೇ ಇಲ್ಲ."

"ಹುಟ್ಟಿದ ೨ ವರ್ಷಗಳವರೆಗೆ ಆಗಾಗ್ಗೆ ಶೀತಬಾಧೆ ಇದ್ದಿರಬೇಕು."

"ಆ ಮೇಲೆಯೂ ಬಿಟ್ಟಿಲ್ಲ."

"ನಿಮ್ಮ ಐದನೇ ವರ್ಷದಲ್ಲಿ ನಿಮ್ಮ ತಂದೆಯನ್ನು ಕಳಕೊಂಡಿರಿ."

"ಶ್!"

"ಏಕೆ?"

"ಅವರು ಒಳಗೇ ಇದ್ದಾರೆ. ಕೇಳಿಯಾರು!"

"ಆದರೆ, ಈ ಜಾತಕದಲ್ಲಿ, ಐದನೇ ವರ್ಷದಲ್ಲಿ ಪಿತೃವಿಯೋಗ ಅಂತ ಸ್ಪಷ್ಟ ಬರೆದಿದೆ. ತಂದೆ ಸಾಯಲೇ ಬೇಕು.... ..."

"ಅವರು ಒಪ್ಪಲಿಕ್ಕಿಲ್ಲ."

"ಜಾತಕ ಸ್ವಚ್ಛವಿದೆ."

"ಇರಬಹುದು. ಹುಟ್ಟಿದವನು ಸಾಯಲೇ ಬೇಕು— ಅದರಲ್ಲಿ ತಪ್ಪಿಲ್ಲ. ಆದರೆ, ಬದುಕಿರುವಾಗ, ಅವರಿಗೆ ಕೇಳಿಸುವಂತೇ, ಸತ್ತಿರಬೇಕೆನ್ನುವುದೂ ಅಥವಾ ಸಾಯಲೇ ಬೇಕೆಂದು ಹಟಮಾಡುವುದೂ ಅಷ್ಟೊಂದು ಸರಿಯೋ ಎಂಬ ಸಂದೇಹ."

"ನಿಮ್ಮ ಜಾತಕ ನೋಡುತ್ತಲೇ, ಕೆಲವೊಂದು ವಿಷಯಗಳು ನನ್ನ ಜಾತಕದಂತೇ ಕಂಡುವು. ಅದಕ್ಕಾಗಿಯೇ ನನ್ನ ಜಾತಕದ ಪ್ರತಿಯನ್ನೂ ಇಲ್ಲಿ ತೆಗೆದು ಇಟ್ಟಿದ್ದೇನೆ ನೋಡಿ! ಕೆಲವು ಗ್ರಹಗಳು ಕೆಲವು ಸ್ಥಾನಗಳಲ್ಲಿ ನಿಂತಾಗ ಪಿತೃವಿಯೋಗ—ನನಗೂ ಹಾಗೇ ನಿಮಗೂ ಹಾಗೇ. ನಂಬಿರಿ ಬಿಡಿರಿ, ಜ್ಯೋತಿಷ್ಯ ಜ್ಯೋತಿಷ್ಯವೇ" ಎಂದನು ಶಿಬ್ಬಣ್ಣ.

ನಾನೂ, ಮಾತಾಡುವ ಮತ್ತು ನನ್ನ ತಂದೆಯು ದೈವಾಧೀನರಾಗಿಲ್ಲ ಎಂಬ ಸತ್ಯವನ್ನು ಒತ್ತಿಹೇಳುವ ನನ್ನ ಮೂಲಭೂತ ಹಕ್ಕುಗಳನ್ನು ಮರೆಯಲಿಲ್ಲ. ದೃಢಸ್ವರದಿಂದ ಹೇಳಿದೆ: "ಜ್ಯೋತಿಷ್ಯವು ನಿಜವಿರಬಹುದು. ನನ್ನ ತಂದೆ ಮಾತ್ರ ಸತ್ತಿಲ್ಲ. ನೀವು ಬೇಸರಿಸದಿದ್ದರೆ ಪುನಃ ಹೇಳುತ್ತೇನೆ—ಅವರು ಹಲವು ವರ್ಷಗಳ ಹಿಂದೆ ದೈವಾಧೀನರಾಗಿರುವರು ಎಂದು ನೀವು ಗಟ್ಟಿಯಾಗಿ ಹೇಳಿದರೆ ವಿಕಲ್ಪ— ವೈಮನಸ್ಯ— ಅಪಕೃತ್ಯ— ಅಪರಾಧ— ಇತ್ಯಾದಿ."

"ಹೋಗಲಿ, ಬಿಡಿ. ನಿಮ್ಮ ತಾಯಿಯ ಜಾತಕವನ್ನು ತನ್ನಿರಿ."

"ಸಾಧ್ಯವಿಲ್ಲ. ಕಳೆದ ವರ್ಷ ಬಿದ್ದುಹೋಗಿದೆ."

"ಚಿಂತೆಯಿಲ್ಲ, ಬಿಡಿ. ನಿಮ್ಮ ಎರಡನೇ ವರ್ಷದಲ್ಲಿ ಒಂದು ವಿಶೇಷ ಘಟನೆಯಾಗಿದ್ದಿರಬೇಕು........"

"ಪ್ರಥಮ ಜಾಗತಿಕ ಯುದ್ಧ... ...." ಎಂದೆ.

ಶಿಬ್ಬಣ್ಣ ಅಧೀರನಾಗಲಿಲ್ಲ. ಪುನಃ ಜಾತಕವನ್ನೆ ದಿಟ್ಟಿಸಿ, ಏನೋ ಲೆಕ್ಕಮಾಡಿ, "ನಿಮ್ಮ ಆಸ್ತಿಪಾಸ್ತಿಗಳೆಲ್ಲವೂ, ನೀವು ಹುಟ್ಟಿದ ಮೂರು ವರ್ಷಗಳಲ್ಲಿ ನಿಮ್ಮ ಕೈಬಿಟ್ಟುವು" ಎಂದನು.

ನಾನೂ ಅಧೀರನಾಗಲಿಲ್ಲ. "ನಾನು ಹುಟ್ಟಿದ ಮೇಲೆ, ಮೂರು ವರ್ಷಗಳೊಳಗೇ ನಮ್ಮ ಕುಟುಂಬದ ಮೊದಲನೇ ಆಸ್ತಿಯನ್ನು ತಂದೆ ಖರೀದಿಸಿದರು ಎಂತ ಆಗಾಗ್ಗೆ ಹೇಳುತ್ತಿರುವರು!" ಎಂದೆ.

"ನಿಮ್ಮ ಇಪ್ಪತ್ತನೇ ವರ್ಷ ಪ್ರಾಯದಲ್ಲಿ ನಿಮಗೊಂದು ಮಹಾ ಕಂಟಕ ಒದಗಿದೆ''—ಎಂದನು ಶಿಬ್ಬಣ್ಣ.

"ನನಗೊಂದು ಹೆಣ್ಣು ನಿಶ್ಚಯವಾದುದು ಆ ವರ್ಷದಲ್ಲಿ. ಆದರೆ, ಆ ಲಗ್ನವೇ ಘಟಿಸಲಿಲ್ಲವೆಂಬುದರಿಂದ—ಅದನ್ನು "ಒದಗಿದ ಮಹಾಕಂಠಕ" ವೆಂದು ನಿಶ್ಚಯವಾಗಿ ಹೇಳಲಾರೆ. ನನ್ನ ಮುಖವನ್ನು ನೋಡಿದರೆ ಒಂದು ಅಸಹನೀಯ ಚತುಷ್ಪಾದದ ನೆನಪಾಗುತ್ತದೆಂದು ಹೇಳಿ ಹೇಳಿ ಆ ಹುಡುಗಿ ಕಣ್ಣೀರಿಳಿಸಿ, ಒಂದೆರಡು ದಿನ ನಡುಗಿದಳೆಂದೂ; ನನಗೆ ಅವಳನ್ನು ಲಗ್ನ ಮಾಡಿಕೊಡುವುದಿಲ್ಲವೆಂದು ಭಾಷೆಕೊಟ್ಟು ಆ ಹುಡುಗಿಯ ಹೆತ್ತವರು ಆ ನಡುಕ ನಿಲ್ಲಿಸಿದರೆಂದೂ ಚೆನ್ನಾಗಿ ನೆನಪುಮಾಡಿಕೊಳ್ಳಬಲ್ಲೆ. ಕಂಠಕ ತಪ್ಪಿದುದು ನಿಜವಾದರೆ ಬಹುಶಃ ಆ ಹುಡುಗಿಗೆ-ವಿನಾ ನನಗಲ್ಲ"—ಎಂದು ಸತ್ಯವನ್ನೇ ಹೇಳಿದೆ.

"ನಿಮಗೆ ಏಳು ಮಕ್ಕಳು"—ಎಂದನು ಶಿಬ್ಬು.

"ಅನಾಥೋ ದೈವರಕ್ಷಕಃ. ಅಂದರೆ, ನನಗೆ ಇನ್ನೂ ಲಗ್ನವೇ ಆಗಿಲ್ಲ. ಅಖಂಡ ಬ್ರಹ್ಮಚಾರಿಯಾಗಿಯೇ ಸೊರಗುತಿದ್ದೇನೆ"—ಎಂದು ವಿವರಿಸಿದೆ.

"ಈ ಜಾತಕದಲ್ಲಿ ಏಳು ಫಲಗಳನ್ನು ಹೇಳಿದೆ''— ಎಂದು ಒತ್ತಾಯ ಪಡಿಸಿದನು.

"ಜ್ಯೋತಿಷ್ಯ ನಿಜವೇನೋ—ಆದರೆ, ಮಕ್ಕಳು ಸುಳ್ಳು'' ಎಂದೆ.

"ಈ ತಿಂಗಳಲ್ಲಿ ನಿಮಗೆ ಆಕಸ್ಮಿಕ ಧನಪ್ರಾಪ್ತಿಯಿದೆ''—ಎಂದ ಶಿಬ್ಬು.

"ನನ್ನ ಐದುಸಾವಿರ ರೂಪಾಯಿಗಳನ್ನು ಶ್ರೀ ಮಹಾವಿಷ್ಣು ಬೇಂಕಿನಲ್ಲಿರಿಸಿದ್ದೆ. ಇದೇ ತಿಂಗಳಲ್ಲಿ ಒಂದು ದಿನ ಬೆಳಿಗ್ಗೆ ಎದ್ದು ನೋಡಿದಾಗ, ಬೇಂಕಿನ ಕಟ್ಟಡವಿತ್ತು, ಹಣವೂ ಅದನ್ನು ರಕ್ಷಿಸುವ ಮತ್ತು ಭಕ್ಷಿಸುವ ಮನುಷ್ಯರೂ ಇರಲಿಲ್ಲ'' ಎಂದೆ. (ಹೊಟ್ಟೆಯಲ್ಲಿ ತಿವಿದಂತಾಗುತಿತ್ತು.)

ಶಿಬ್ಬು, 'ನಾಸಿಕ ಮಾರ್ಗ' ನಸ್ಯವನ್ನೇರಿಸಿ, "ಇನ್ನು ಹೊತ್ತಾಯಿತು. ನಾಳೆ ಪುನಃ ಹೇಳುತ್ತೇನೆ'' ಎಂದನು.

—ಆ ಮೇಲೆ, ನನ್ನ ಜಾತಕದ ಪ್ರತಿಯನ್ನು ನನಗೆ ಕೊಡಲು ಹೋಗಿ, ''ಅರರೆ!!'' ಎಂದನು.

"ಏನು?"

''ಈ ವರೆಗೆ ನಾನು ನೋಡಿದ್ದೂ ಹೇಳಿದ್ದೂ ನಿಮ್ಮ ಜಾತಕವಲ್ಲ; ನನ್ನದು!"

"ನಿಮ್ಮದು?"

"ಅಹುದು!"—ಶಿಬ್ಣು ಉಗುಳು ನುಂಗುತ್ತ ಹೇಳಿದನು. "ನಿಮ್ಮ ಜಾತಕವನ್ನು ನನ್ನದೆಂಜೇ ನೆನಸಿ ಮಡಚಿ ಕಿಸೆಗೆ ಹಾಕಿ, ನನ್ನದನ್ನು ತೆಗೆದಿಟ್ಟುದನ್ನು ನಿಮ್ಮದೆಂದೇ ಭಾವಿಸಿ, ಅದನ್ನೆ ಹೇಳುತ್ತ ಹೋದೆ! ಹೀಗೂ ಉಂಟೇ?"

"ಉಂಟೆಂದು ನೀವೇ ರುಜುಗೊಳಿಸಿದರಲ್ಲ!" ಎಂದೆ.

"ಈಗೇನು ಮಾಡುವುದು?"—ಶಿಬ್ಣು ಕಳವಳದಿಂದ ಕೇಳಿದನು.

"ಏನೂ ಮಾಡುವ ಅವಶ್ಯವಿಲ್ಲ. ನೀವು ಯಾವ ಜಾತಕ ನೋಡಿ ಫಲ ಹೇಳಿದರೂ ನನ್ನ ಮಟ್ಟಿಗೆ ಒಂದೇ!" ಎಂದೆ.

■■■■■■■■■

## ೨. ಮಾಚುಭಕ್ಷಕ ಮಾಸಯ್ಯ

*ಸಮರ್ಪಣೆ: ಬಹುಬೆಲೆಯ ಮಾಚುಗಳನ್ನು ತಿಂದು, ನಮ್ಮೆಲ್ಲರ ಸ್ಮರಣೆಯಲ್ಲಿ ಚಿರಕಾಲ ಉಳಿದಿರುವ ಮಾಸಯ್ಯನಿಗೆ.

ಸೇಡಿನಿಂದ ಬರೆಯುತ್ತಿದ್ದೇನೆಂದು ಭಾವಿಸಲಾಗದು. ಮಮತೆಯ ಬುಗ್ಗೆಯೊಡೆದು ಹರಿದೇ ಬರೆಯುತ್ತಿದ್ದೇನೆ. ಹಾಗೆಂದು ಅವನ ಮೇಲೆ ನನಗೆ ಸೇಡಿನ ತೃಷೆಯುಂಟಾಗಲೇ ಇಲ್ಲವೆಂದೇನೂ ಅಲ್ಲ. ಅನೇಕ ಬಾರಿ ಅವನ ಕೊಲೆಗೆ ಯೋಜನೆಗಳನ್ನು ತಯಾರಿಸಿದ್ದೇನೆ. ಆದರೆ, ಕೊಲ್ಲಲಾಗಲಿಲ್ಲ.

ಅವನ ಪರಿಚಯವಾದುದು ನಗರಸೆಟ್ಟಿ ಪದ್ಮನಾಭಯ್ಯನವರ ಮನೆಯಲ್ಲಿ. ಅಲ್ಲಿ ಹೈದರಾಲಿಯ ಸಮಕಾಲೀನ ಗಡಿಯಾರಗಳಿದ್ದುವು. ಒಂದು ಗಡಿಯಾರವು ಮೇಲಂತಸ್ತಿಗೆ ನೇತಾಡುತಿತ್ತು. ಅದರ ಒಳಗಿನ ಚಾಲೂ ದಂಡವು (Pendulum) ಮೂರಡಿ ಇದ್ದು, ನೋಡುವವರಲ್ಲಿ ಭಯ-ಭಕ್ತಿಗಳನ್ನು ಹುಟ್ಟಿಸುತಿತ್ತು. "ಕ್ಲಾಕ್‌ನಾಸ್ತಿಕ"ರನೇಕರು ಈ ಕ್ಲಾಕ್ಕನ್ನು (ಗಡಿಯಾರ) ನೋಡಿ ಆಸ್ತಿಕರಾಗಿರುವರೆಂದು ಪದ್ಮನಾಭಯ್ಯನವರು ನನಗೆ ಹೇಳಿದ್ದರು. ಆ ಕ್ಲಾಕ್ಕಿನ ಮುಖದ ಮೇಲೆ ಬರೆದಿರುವ ಗಂಟೆಗಳನ್ನು, ಭಯಪೀಡಿತ ಯಾನೆ 'ನರ ಮುರಿ ನರ'(Nervous wreck)ನೊಬ್ಬನು ಈ ರೀತಿ ವರ್ಣಿಸಿರುವನಾಗಿ ಪ್ರತೀತಿಯಿದೆ: "IIIರಲ್ಲಿ ಕ್ರಿಕೆಟ್ ಆಡಬಹುದು; Xರಲ್ಲಿ ತೂಗಿಕೊಂಡು, XIIರಲ್ಲಿ (X ನಂತರ IIರಲ್ಲಿ) ಏಣಿಯೇರಿ ಹೋಗ

ಬಹುದು; ತಪ್ಪಿಸಿಕೊಂಡು ಓಡದಂತೆ ಗಂಟೆ-ನಿಮಿಷಗಳ ಮುಳ್ಳುಗಳು ಬೆನ್ನಟ್ಟುತ್ತವೆ. Xರಲ್ಲಿ ಗಲ್ಲಿಗೇರಿಸುವ ಗಂಟೆ ಬಾರಿಸುತ್ತದೆ. XIIರಲ್ಲಿ ಯಾತ್ರೆ ಮಾಡುವ ಬಿಗಿಲೂದುತ್ತದೆ........" ಈ ರಾಕ್ಷಸ ಗಡಿಯಾರದ ಮುಂದೆ ವಾಚ್‌ಭಕ್ಷಕ ವಾಸಯ್ಯನು ಒಂದು ದಿನ ಬೆಳಗ್ಗೆ ನಿಂತು, ತನ್ನ ಮುಳಿಮೀಸೆಯ ಮುಖದಿಂದ ಅದನ್ನೆದುರಿಸಿದ್ದನು.

ಸಂಗ್ರಾಮದ ಸಿದ್ಧತೆಯಾಗಿತ್ತು. ಎರಡೂ ಕಡೆಯ ಸೇನಾನಿಗಳು ('ಕ್ಲಾಕ್' ಮತ್ತು ವಾಸಯ್ಯ) ಸಿದ್ಧರಾಗಿದ್ದರು. ವಾಸಯ್ಯನು ಅರ್ಜುನನಂತೆ ಮಮತೆಯ ವಿಕಾರ ತೋರಿಸಲಿಲ್ಲ. ಸರ್ಪವನ್ನು ಮುಂಗುಸಿ ನೋಡುವಂತೆ ನೋಡುತ್ತಿದ್ದನು. ಈ ಕಾಳಗವನ್ನೇರ್ಪಡಿಸಿದ ನಗರಸೆಟ್ಟರು, ಪಂಚೆಯುಟ್ಟು ಕೊಂಡು, ಸೊಂಟಕ್ಕೆ ಬೀಗದಕೈ ಗೊಂಚಲನ್ನು ಸಿಕ್ಕಿಸಿ, ಉಂಗುರವಿರುವ ಬೆರಳಿಗೆ ಒತ್ತಿ ಸಿಗರೇಟು ಉರಿಸಿ ನಿಂತಿದ್ದರು. ಈ ಸಮಯದಲ್ಲಿ ನಾನು ಅಲ್ಲಿಗೆ, ನನ್ನದೊಂದು ಖಾಸಗಿ ಕೆಲಸದಲ್ಲಿ ತಲಪಿದೆ.

ಪದ್ಮನಾಭಯ್ಯನವರು ನನ್ನ ಕಡೆಗೆ ನೋಡಿ, ನನ್ನ ಕೈಜೋಡಣೆಗೆ ತಮ್ಮ ಶಿರಸ್ಪಂದನಮಾಡಿದರು. ವಾಸಯ್ಯನು ಇತ್ತ ನೋಡಲಿಲ್ಲ. ಸಮರೋದ್ಯತ ಸೇನಾನಿಗೆ ಈ ಕಡೆ ಲಕ್ಷ್ಯಕೊಡುವ ಅಬಲತನವಿರಬಾರದು!

"ಏನಿದು?"—ನಾನು ಕೇಳಿದೆ.

"ಭಾರತಸಿಂಹದ ಚಿಕಿತ್ಸೆ" ನಗರಸೆಟ್ಟರು ಉತ್ತರವಿತ್ತರು.

"ಭಾರತಸಿಂಹವೆಂದರೇನು?"

"ಈ ಕ್ಲಾಕ್."

"ಇದಕ್ಕೆ ಚಿಕಿತ್ಸೆಯೇನು?"

"ನಡಿಯುತ್ತದೆ—ನಿಲ್ಲುವುದಿಲ್ಲ—ಆದರೆ, ಘಂಟೆ ತಿಳಿಯುವುದಿಲ್ಲ."

"ಇದರ ರಿಪೇರಿ ಮಾಡುವುದೇತರಿಂದ?"

"ವಾಸಯ್ಯ."

"ವಾಸಯ್ಯ ಎಂದರೇನು?"

"ಇದೇ, ಇವರೇ, ಇಲ್ಲಿ ನಿಂತಿರುವವರೇ!"

ಆಗ ಸರಿಯಾಗಿ ತಿಳಿದುಕೊಂಡೆ. ವಾಸಯ್ಯನೆಂದರೆ, ಮದ್ದಿನ ಅಥವಾ ಒಂದು ಉಪಕರಣದ ಹೆಸರಲ್ಲ; ಮನುಷ್ಯ. ಆದರೆ, ವಾಸಯ್ಯನ ಕೈಯಲ್ಲಿ ನಾಲ್ಕಂಗುಲದ ಒಂದು 'ಸ್ಕ್ರೂ ಡ್ರೈವರ್' ಮಾತ್ರ ಇದೆ. ಭಾರತ

ಸಿಂಹಕ್ಕೆ ಇದು ಸಾಕೇ? ಕೊಡಲಿ, ಹಾರೆ, ಪಿಕ್ಕಾಸುಗಳಷ್ಟಾದರೂ ಗಾತ್ರದ ಶಸ್ತ್ರಾಸ್ತ್ರಗಳು ಇರಬೇಡವೇ?

ನನಗೇನು! ನಗರಸೆಟ್ಟಿಯವರೊಂದಿಗೆ ಬಳಿಯ ಕೊಠಡಿಯಲ್ಲಿ ನಾಲು ಕ್ಷಣ ಮಾತಾಡಿ, ಮರುದಿನದ ಭೇಟಿಯನ್ನು ನಿಶ್ಚೈಸಿ ಬಂದೆ. ಮರುದಿನ ಹೋಗುವಾಗ, "ಭಾರತ ಸಿಂಹ''ವು ಝುಗಝುಗಿಸಿ ನಿಂತು, ಸರಿಯಾದ ಗಂಟೆ ತೋರಿಸುತಿತ್ತು. ಯುದ್ಧವು ಜಯಿಸಲ್ಪಟ್ಟಿತ್ತು. ಶಾಂತಿಸ್ಥಾಪನೆಯಾಗಿತ್ತು. ವಾಸಯ್ಯನು ಭೂಷಿತನಾಗಿದ್ದನು. ನಗರಸೆಟ್ಟಿಯವರು ಆನಂದದಿಂದ ಯಕ್ಷಗಾನ ಮಾಡುತ್ತಿದ್ದರು. ಈ ಆನಂದ ಭರದಲ್ಲಿ ನನ್ನ ಕೆಲಸವು ಶ್ರಮವಿಲ್ಲದೆ, ನನಗನುಕೂಲವಾಗಿ ಮುಗಿಯಿತು. ಈ ಯಶಸ್ಸಿಗೆ ವಾಸಯ್ಯನೇ ಕಾರಣ. ಭಾರತ ಸಿಂಹದ ಯಶಸ್ವೀ ಚಿಕಿತ್ಸೆಯಿಂದ ನಗರಸೆಟ್ಟಿಯವರಲ್ಲುಂಟಾದ ಆನಂದವು ನನ್ನ ಕಾರ್ಯಕ್ಕೆ ಅನುಕೂಲವಾಯಿತು. ಇದರ ಕೀರ್ತಿ ವಾಸಯ್ಯನಿಗೆ—ಎಂದು ತೀರ್ಮಾನಿಸಿ, ವಾಸಯ್ಯನ ಮೇಲೆ ಆಕಸ್ಮಿಕ ಪ್ರೇಮ ಉದ್ಭವವಾಯಿತು. ವಾಸಯ್ಯನಿಗೆ ನನ್ನದೊಂದು ವಾಚನ್ನು ಸ್ವಚ್ಛಪಡಿಸಲು ಕೊಡಲಾರೆನೇಕೆ?

ಆದರೆ ಮಾರಾಯನಿಗೆ ಅಂಗಡಿಯಿಲ್ಲ; ಮನೆ ಇದ್ದರೂ ಎಲ್ಲೆಂದು ತಿಳಿವಿಲ್ಲ. ಅವನೇ ಒಂದು ದಿನ, ಚಿಕ್ಕ ಚೀಲ ಹಿಡಕೊಂಡು ಬರುವಾಗ ದಾರಿಯಲ್ಲಿ ಸಿಕ್ಕಿದನು.

"ವಾಸಯ್ಯ! ಬಾರಯ್ಯ" ನಯವಾಗಿ,ಪ್ರೇಮದಿಂದ ಕರೆದೆ. ಇನ್ನೂರು ರೂಪಾಯಿ ಬೆಲೆ ಬಾಳುವ ವಾಚನ್ನು ಅವನ ಕೈಗಿತ್ತೆ. "ವಾಚು ಸರಿಯಾಗಿದೆ ವಾಸಯ್ಯ, ಸ್ವಚ್ಛಮಾಡಿದರಾಯಿತು, ಅಷ್ಟೆ!'' ಎಂದೆ.

ಮೀಸೆ ಅಲುಗಾಡಿತು. ಬಲಗೈ ವಾಚನ್ನು ತೆಗೆದುಕೊಂಡಿತು. ಮೀಸೆಯ ಮೇಲಿನ ಕಣ್ಣುಗಳು ವಾಚನ್ನು ದೃಷ್ಟಿಸಿದವು. ಕಿಸೆಯಿಂದ ಎಡಗೈಯು ಒಂದು ಚಿಕ್ಕ ಕನ್ನಡಿಗೂಡನ್ನು ತೆಗೆದು ಒಂದು ಕಣ್ಣಿಗಿಟ್ಟಿತು. ವಾಚು ತೆರೆಯಿತು. ವಾಸಯ್ಯ ಆ ಗೂಡಿನೊಳಗಿಂದ ಇಣಿಕಿದ. ವಾಚು ಈ ಮಾನಭಂಗವನ್ನು ಆಕ್ಷೇಪಿಸಲಿಲ್ಲ. ವಾಸಯ್ಯನು ಆ ಗೂಡಿನಿಂದ ಇಣುಕುವ ದೃಶ್ಯವು—ನೋಡತಕ್ಕಂತಿತ್ತು. ಕೈಯಲ್ಲಿ ತೆರೆದ ವಾಚು; ಎಡಗಣ್ಣಿಗೆ ಚಿಕ್ಕ ಗೂಡು; ಬಲಗಣ್ಣು ಮುಚ್ಚು; ಮೀಸೆಯೆತ್ತು........ ದೇವ ದುರ್ಲಭ ನೋಟ!

"ಸರಿಯಿದೆಯೇ ವಾಸಯ್ಯ?"

ಮೀಸೆಗಳಲುಗಾಡಿದುವು. ಈ ಬಾರಿ ಅವುಗಳ ನಡುವಿನಿಂದ ನಾಲ್ಕು ಪಂಕ್ತಿಗಳು ಚಡಪಡಿಸಿಕೊಂಡು ಹೊರಬಿದ್ದುವು: "ಸರಿಯಿದೆ; ಆಯಿಲ್ ಮಾಡಬೇಕು; ಕೊಂಡು ಹೋಗುವೆನು; ನಾಳೆ ತರುವೆನು."

ಒಮ್ಮೆ ಮೈ ಝುಮ್ಮಾಯಿತು. ಆದರೂ, ತಡೆದು ಹೇಳಿದೆ: "ವಾಸಯ್ಯ, ನಾನು ಈ ವಾಚನ್ನು ಯಾರ ಕೈಗೂ ಕೊಡುವುದಿಲ್ಲ. ಆದರೆ, ನೀನು........ ಸರಿ, ಕೊಂಡು ಹೋಗು. ನಾಳೆಯೇ ತಾ."

ಮೀಸೆ ಅಲುಗಾಡಿತು. ಹೊರಡಲಿದ್ದ ಶಬ್ದಗಳು ಅಲ್ಲಿಯೇ ಸತ್ತುವು. ವಾಚು ಮುಚ್ಚಲ್ಪಟ್ಟು ಒಳಕಿಸೆಗೆ ಹೋಯಿತು. ವಾಸಯ್ಯ ಹೊರಗೆ ಹೋಯಿತು............ಕ್ಷಮಿಸಿ,....ಹೋದನು.

'ನಾಳೆ' ಬಂತು; ಪುನಃ ಬಂತು; ಮತ್ತೊಮ್ಮೆ ಬಂತು–ಹೋಯಿತು. ಬಂತು-ಹೋಯಿತು. 'ನಾಳೆ' ಹೋಗಿ 'ಕಳೆದ ತಿಂಗಳಾ'ಯಿತು. ಅದೂ ಹೋಗಿ 'ಕಳೆದ ವರುಷ'ವಾಯಿತು. 'ಶತಮಾನ'ವೂ ಆಗುತ್ತಿತ್ತು— ಆದರೆ, ವಾಸಯ್ಯನಿಗೂ ನನಗೂ, ಅದು ದೊರೆಯುವುದಿಲ್ಲ. ರಸ್ತೆಯಿಂದ ರಸ್ತೆಗೆ, ವಾಸಯ್ಯನಿಗಾಗಿ ತಿರುಗಿದೆ. ಇನಾಸರ ಹಿತ್ತಿಲಲ್ಲಿ ತುದಿಮನೆಯೆಂದು ಯಾರೋ ಹೇಳಿದರು. ಅಲ್ಲಿಗೆ ಹೋಗಿ 'ತುದಿಮನೆ'ಗೆ ತಲುಪಿದೆ. ದಾರಿಯಲ್ಲಿ ಮಲಗಿದ್ದ ಒಂದು ಹಂದಿಯ ಹೊಟ್ಟೆಯ ಮೇಲೆ ಕಾಲಿಟ್ಟು, ಸುದೈವವಶಾತ್ ಕಚ್ಚಿಸಿಕೊಳ್ಳದೆ, 'ತುದಿಮನೆ'ಯಲ್ಲಿ ವಿಚಾರಿಸಿ, ಅದು "ವಾಚಿನ ವಾಸಯ್ಯನ ಮನೆಯಲ್ಲ, ಶವದಹನ ಕಂಟ್ರಾಕ್ಟರ್ ವಾಸಯ್ಯನ ಮನೆ"ಯೆಂದು ತಿಳಿದು ಹಿಂದಿರುಗಿದೆ. ಬರುವಾಗ, ಹುಲಿಗಾತ್ರದ ನಾಯಿಯೊಂದು ಬೊಗಳಿ ಬೆನ್ನಟ್ಟಿತು. ಸ್ವಲ್ಪ 'ರೇಸ್' ಮಾಡಿ, ವ್ಯಾಯಾಮದ ಸುಖ ಅನುಭವಿಸಿ, ಹೊರಗೆ ಬಂದು, ಬೆವರುಜ್ಜಿ ಪುನಃ ರಸ್ತೆಗಳಲ್ಲೇ ಅನ್ವೇಷಣ ಮುಂದುವರಿಸಿದೆ.

"ಗಣಪಯ್ಯರ ಗುಡ್ಡೆಯಲ್ಲಿ" ಎಂದು ಯಾರೋ ಹೇಳಿದರು. ಅಲ್ಲಿ ಹಂದಿಯೂ ನಾಯಿಯೂ ಇರಲಾರವೆಂದು ಆಶಿಸಿ, ನಂಬಿ ಹೋದೆ. ಆದರೆ, ಬಾಗಿಲಲ್ಲೇ ನಾಯಿ, ಎಂಟಡಿ ಹಿಂದೆ ಹಂದಿ, ಹನ್ನೆರಡಡಿ ಒಳಗೆ ಕೋಳಿ ಮತ್ತು ಬಳಗ, ಆದರಾಚೆ 'ಟರ್ಕಿ', ದೂರದಲ್ಲಿ ಎರಡು ಆಡುಗಳಿದ್ದುವು. ಇನಾಸರ ಹಿತ್ತಲಿಗಿಂತ ಗಣಪಯ್ಯರ ಗುಡ್ಡೆಯು ದೊಡ್ಡ ಮೃಗಾಲಯವೆಂದು

ತಿಳಿಯಿತು. ಅಷ್ಟು ಮೃಗ-ಪಕ್ಷಿಗಳನ್ನು ದಾಟಿ, ವಾಸಯ್ಯನಿದ್ದಲ್ಲಿಗೆ, ಶಸ್ತ್ರಾಸ್ತ್ರವಿಹೀನನಾಗಿ ಹೋಗುವುದು ಜಾಣತನವಲ್ಲವೆಂದು ಹೊಳೆಯಿತು. ಮಾತ್ರವಲ್ಲ,—ಇನಾಸರ ನಾಯಿಯು ಬೊಗಳಿತ್ತಾದರೆ, ಗಣಪಯ್ಯರ ದ್ವಾರಪಾಲಕನು ಮೌನವಾಗಿತ್ತು. ಕಚ್ಚುವ ನಾಯಿ ಬೊಗಳುವುದಿಲ್ಲ ವೆಂದು ಚಿಕ್ಕ ಪ್ರಾಯದಲ್ಲೇ ಮೇಷ್ಟು ಹೇಳಿದ್ದರು. ಏನು ಮಾಡೋಣ.... ಎಂದಾಲೋಚಿಸುವಷ್ಟರಲ್ಲಿ ಗೇಟಿನೊಳಗಿನಿಂದ ಒಬ್ಬ ಮುಂಡಾಸಿನ ಮನು ಷ್ಯನು ಹೊರಬಂದ. ಇವನೇ ಗಣಪಯ್ಯನಾಗಿರಬಹುದೆಂದೂಹಿಸಿ, "ವಾಸ ಯ್ಯನ ಮನೆ ಇಲ್ಲಿಯೇ?" ಎಂದು ಕೇಳಿದೆ. ಗಣಪಯ್ಯನೆಂಬ ಕಲ್ಪನೆ ಕೊಟ್ಟ ಮಹಾಶಯರು ಒಂದು ನಿಮಿಷ ನನ್ನನ್ನು ಸ್ಥಿರದೃಷ್ಟಿಯಿಂದ ನೋಡಿ ನಸ್ಯ ಸೇದಿ,—"ನಾನಿಲ್ಲಿ ಹೊಸಬನು; ಇದು ಆಸ್ಪತ್ರೆ" ಎಂದರು.

"ಬೇಸರಿಸದಿರಿ" ನಾನು ಕ್ಷಮೆಗೆ ಯತ್ನಿಸಿದೆ.

"ನಿಮಗೆ ಹೇಗೆ ತಿಳಿಯಿತು?" ಗಣಪಯ್ಯ ಕೇಳಿದರು.

"ತಿಳಿಯಿತು....!" (ತಿಳಿದುದೇನೋ ದೇವರೇ ಬಲ್ಲ!)

"ನಮಸ್ಕಾರ....!" ಗಣಪಯ್ಯರಿಂದ ನನಗೆ.

"ಆದರೆ, ಈ ಆಸ್ಪತ್ರೆಯಲ್ಲಿ ವಾಸಯ್ಯನೆಂಬ ಹೆಸರಿನ ರೋಗಿ ಇರು ವರೇ? ತಾವು ಡಾಕ್ಟರರಾಗಿ...."

"ಇಲ್ಲಿ ರೋಗಿಗಳಿಲ್ಲ ನನ್ನ ಅಣ್ಣರೊಬ್ಬರೇ ರೋಗಿಯಾಗಿದ್ದವರು. ನಾನವರನ್ನು ನೋಡಲು ಬಂದಿದ್ದೆ."

ನನಗೆ ತೀವ್ರ ನಿರಾಶೆಯಾಯಿತು. ಆದರೂ ಔಪಚಾರಿಕವಾಗಿ ಹೇಳಿದೆ, "ನಿಮ್ಮ ಅಣ್ಣ............ಸೌಖ್ಯವಷ್ಟೇ?"

ಗಣಪಯ್ಯರಲ್ಲದ ಈ ಮಹನೀಯರು ನನಗೆ ಹೆಚ್ಚು ಬಾಧೆ ಕೊಡ ಲಿಲ್ಲ. "ಅಹುದು, ಈ ದಿನ ಬೆಳಗ್ಗೆ ಪರಂಧಾಮವನ್ನೈದಿದರು!" ಎಂದು ಹೇಳಿ ಮತ್ತೊಮ್ಮೆ ನಸ್ಯ ಸೇದಿ, ಬೆತ್ತ ತಿರುಗಿಸುತ್ತಾ ಹೋದರು. ಶವ ದಹನ ಕಂಟ್ರಾಕ್ಟರ್ ವಾಸಯ್ಯನಲ್ಲಿಗೋ ಏನೋ ಎಂದಾಲೋಚಿಸುತ್ತಾ, ನನ್ನ ವಾಸಯ್ಯನನ್ನು ಧ್ಯಾನಿಸುತ್ತ ಕೆಳಗಿಳಿದು ಬಂದೆ.

"ಮೇಲ್ಮನೆ ಮರಪುಳಿತ್ತಾಯರ ತೋಟದಲ್ಲಿ" ಎಂದು ಮತ್ತೊಬ್ಬರು ಅಂದಾಜು ಹೇಳಿದರು. ಆದರೆ ನಾನಲ್ಲಿಗೆ ಹೋಗಲಿಲ್ಲ. ಅದೂ ಒಂದು ಮೃಗಾಲಯ ಇಲ್ಲವೇ ಆಸ್ಪತ್ರೆಯಾಗಿದ್ದರೆ! ನನ್ನನ್ನು ಜನರೆಲ್ಲ ಒಳಸಂಚಿ

ನಂದ, 'ವಾಸಯ್ಯನಿಲ್ಲದ ಜನಭಯಂಕರ ಸ್ಥಳಗಳಿಗೆ ಕಳಿಸುತ್ತಿರುವರೆಂಬ ಸಂಶಯ ನನಗಾಗಿತ್ತು. ನಾನು ಹೋಗುವೆನೇ? ಇನ್ನು ವಂಚಿಸಲ್ಪಡುವೆನೇ?

ಬೇಟೆ ನಡೆಯಿತು. ನಗರದ ರಸ್ತೆಗಳಲ್ಲಿ ಹನ್ನೆರಡು ಗಂಟೆ ರಾತ್ರಿಯು ತನಕ, ಒಂದು ವರ್ಷ ಸುತ್ತಾಡಿದೆ. ಎಲ್ಲಿಯೂ ವಾಸಯ್ಯನನ್ನು ಕಂಡವರಿಲ್ಲ. ಕೊನೆಗೊಂದು ದಿನ, ಒಬ್ಬ ಹಳೆಯ ಪರಿಚಿತನೊಬ್ಬನ ಭೇಟಿಯಾಯಿತು. ವಾಸಯ್ಯನ ಸುದ್ದಿ ತೆಗೆದೊಡನೆ ಮೂರಡಿ ಹಾರಿದ! ಮತ್ತೆ ಹೇಳಿದ, "ತಿಳಿಯಿತು ಮಿತ್ರಾ, ತಿಳಿಯಿತು! ವಾಚ್ ಭಕ್ಷಕ ವಾಸಯ್ಯ!"

"ಭಕ್ಷಕನೇ?" ಮುಖ ಬಿಳುಪೇರಿ ಕೇಳಿದೆ.

"ಥೇಟು ಭಕ್ಷಕ. ಇಡಿಯಿಡೀ ವಾಚನ್ನು ಬಾಯೊಳಗೆ ಹಾಕಿ, ಜಗಿಯದೆ ನುಂಗಿ, ಮೀಸೆಯಾಡಿಸಿ, ಪಿಳಿಪಿಳಿ ನೋಡುತ್ತಾನೆ. ಒಮ್ಮೆ ವಾಚು ಕೊಟ್ಟರೆ, ಮತ್ತೆ ವಾಚೂ ಇಲ್ಲ, ವಾಸಯ್ಯನೂ ಇಲ್ಲ."

"ಭಾರಿ ಜಾದೂಗಾರ!"

"ಜಾದೂಗಾರ! ಚಿಕ್ಕ ಚಿಕ್ಕ ವಾಚುಗಳನ್ನು ನುಂಗಿ ಅಭ್ಯಾಸವಾಗಿ ಮೊನ್ನೆ ವಿಠಲರಾಯರ ದೊಡ್ಡ ಷೈಕೋಷಾ ನುಂಗಿದನಂತೆ!"

ಎದೆ ನಡುಗಿ ನಾನು, "ಮಾರಾಯಾ, ದೊಡ್ಡ ದೊಡ್ಡ ಗೂಢ ಶಬ್ದಗಳನ್ನಾಡಿ ದಿಗಿಲುಗೊಳಿಸಬೇಡ. ಒಮ್ಮೆ ಎಲ್ಲ ಗುಟ್ಟನ್ನು ಚಂದ ಭಾಷೆಯಲ್ಲಿ ಹೇಳು. ಮೊದಲು—ಷೈಕೋಷಾ ಅಂದರೇನು?" ಎಂದು ಕೇಳಿದೆ.

"ಷೈಕೋಷಾ ಎಂದರೆ ಜಪಾನ್ ಕ್ಲಾಕ್. ಗಾತ್ರ ಇಪ್ಪತ್ತು ಇಂಚು. ಬೆಲೆ ಕಡಿಮೆ. ತಿಂದರೆ ಮರಣ ಖಂಡಿತ!"

"ನಾರಾಯಣ."

"ನೀನು ಯಾವ ದೇವರ ಹೆಸರೆತ್ತಿಯೂ ಪ್ರಯೋಜನವಿಲ್ಲ. ಜಪಾನ್ ವಾಚುಗಳನ್ನಾಗಲೀ ಕ್ಲಾಕ್‌ಗಳನ್ನಾಗಲೀ ತಿಂದವರು ಬದುಕುವ ಆಸೆಯಿಲ್ಲ."

"ವಾಸಯ್ಯ............?"

"ಅವನಿಗೆ ಮಾತ್ರ ಏನೂ ಆಗುವುದಿಲ್ಲ!"

ಹಣೆಯ ಮೇಲೆದ್ದು ನಿಂತ ಬೆವರು ಹನಿಗಳನ್ನು ಉಜ್ಜಿ, "ಬಾ ಗೆಳೆಯ, ಒಂದು ತಟ್ಟೆ ಕಾಫಿ ಕುಡಿದು, ಕೊಂಚ ಉಸಿರು ಬಿಡೋಣ" ಎಂದು ಹೇಳಿ, ಗೆಳೆಯನೊಡನೆ ಬದಿಯ ಹೊಟೆಲಿಗೆ ಹೋದೆ.

ಅಲ್ಲಿ....ಯಜಮಾನನ ಮೇಜಿನ ಬಳಿಯಲ್ಲಿ ಮುಳಿಮೀಸೆ ವಾಸಯ್ಯ, ಕಣ್ಣು ಗೂಡನ್ನೇರಿಸಿ ಎಷ್ಟನೇ ಸಾವಿರದ ವಾಚನ್ನೋ ಭಕ್ಷಿಸುವ ಕಾರ್ಯ ದಲ್ಲಿ ಮಗ್ನನಾಗಿದ್ದನು.

ನನ್ನ ಅನ್ವೇಷಣ ಮುಗಿಯಿತು. ಇಷ್ಟು ಕಾಲವೂ ತಡೆದಿಟ್ಟ ಜ್ವಾಲಾಮುಖಿಗೆ ಈಗ ಬಾಯಿ ಬಂತು.

"ವಾಸಯ್ಯ!" (ಹೊಟೇಲು ನಡುಗಿತು. ನಡುಗಿಸಿದವನು ನಾನು!) ವಾಸಯ್ಯ ನನ್ನನ್ನು ನೋಡಿದ. ಆದರೆ ಮುಖದಲ್ಲಿ ಅಪರಾಧಿಯ ಚಿಹ್ನ ವಿಲ್ಲ. ಮೀಸೆ ಅಲುಗಾಡಿತು.

"ಎಲ್ಲಿದೆ ವಾಚು?''

ವಾಸಯ್ಯ ಕಿಸೆಗೆ ಕೈ ತುರುಕಿ, ಮುಷ್ಟಿತುಂಬ ವಾಚುಗಳನ್ನು ತೆಗೆ ದನು. "ಇಲ್ಲಿ ಇದೆ.'' ಎಂದರ್ಥ.

ಕೈ ಚಾಚಿದೆ. ವಾಸಯ್ಯ ಕೊಡಲಿಲ್ಲ. ಪುನಃ ಆ ವಾಚುಗಳನ್ನೆಲ್ಲ ಅದೇ ಕಿಸೆಗೆ ತುರುಕಿದ. ಮತ್ತೆ ಬಾಯಿಗೆ ಕೈ ಹಾಕಿ, ಅಲ್ಲಿಟ್ಟು ಜಗಿಯು ತ್ತಿದ್ದ ಮೂರು ಚಕ್ರಗಳನ್ನು ಕೆಳಗಿಟ್ಟು, ಸ್ಥಿರ ದೃಷ್ಟಿಯಿಂದ ನನ್ನನ್ನು ನೋಡಿ, "ನಾಳೆ ತರುವೆನು. ಕಾಯಿಲೆ ಬಿದ್ದಿದ್ದೆ'' ಎಂದ.

"ಕಾಯಿಲೆ? ಒಂದು ವರ್ಷ? ಕ್ಷಯವೇ?''

"ಕಾಲು ಬಾತಿತ್ತು; ದೊಡ್ಡವ್ರಣ. ಈಗ ಸೌಖ್ಯ. ತಿನ್ನುವವನಲ್ಲ. ಇವರನ್ನು ವಿಚಾರಿಸಿರಿ'' (ಹೋಟೆಲು ಯಜಮಾನನನ್ನು ತೋರಿಸಿ ಹೇಳಿದ ಮಾತು.)

ಹೋಟೆಲು ಯಜಮಾನನು, ವಜ್ರದ ಒಂಟೆಯ ಕಿವಿಗಳ ಮುಖ ವನ್ನು ಗಿರ್ರನೆ ತಿರುಗಿಸಿ, ನಕ್ಕು, ಕಾಲುಗಳನ್ನಲ್ಲಾಡಿಸಿ, ಉಂಗುರದ ಕೈಯೆತ್ತಿ—"ತಿನ್ನಲಾರ, ನನ್ನ ಗ್ಯಾರಂಟಿ. ವಾಸಯ್ಯ ಕಾಫಿ ತಿಂಡಿ ಕೂಡ ಇಲ್ಲ........'' ಎಂದು ಆಶ್ವಾಸನೆಯಿತ್ತನು.

ವಾಸಯ್ಯನ ಕೊಲೆಯ ಆಲೋಚನೆ ಅಲ್ಲಿಗೇ ಮುಗಿಯಿತು. ಕಾಫಿ ಕುಡಿದು, "ಖಂಡಿತ ನಾಳೆ ಕೊಡು.'' ಎಂದು ಉಚ್ಚರಿಸಿ ಹೊರಟೆ. ನನ್ನ ಗೆಳೆಯನು ಅವನೊಡನೆ, "ವಿಠಲರಾಯರ ಪ್ರೈಕೋರ್ಟ್ ಏನಾಯಿತು?'' ಎಂದು ವಿಚಾರಿಸಿದನು.

''ಅದು ಕೊಟ್ಟಾಗಿದೆ. ನಡೆಯುತ್ತಿದೆ'' ಎಂದ.

ಮನೆಯನ್ನು ತಲಪಿದಾಗ, ವಾಸಯ್ಯನ ಸರಿಯಾದ ವಿಳಾಸ ಕೇಳ
ಬೇಕಿತ್ತೆಂದು ಹೊಳೆದು, ಹೊಟೇಲಿಗೆ ಪುನಃ ಓಡಿದೆ. ವಾಸಯ್ಯ ಇರಲಿಲ್ಲ
ಹೊಟೇಲು ಯಜಮಾನನೊಡನೆ ವಿಚಾರಿಸಲು, ಕೈಗೆ ವಾಚಿನ ಮುಳ್ಳು
ತಾಗಿ ನೋವು ಹೆಚ್ಚಾಯಿತೆಂದು ಹೋದನೆಂದು ಉತ್ತರ ಬಂತು. ಹೊಟೆ
ಲಿನವರ ಟೈಂಪೀಸನ್ನೂ ಒಯ್ದಿದ್ದನು.

ವಾಸಯ್ಯನ ಪುರಾಣದಿಂದ ವಾಚಕರನ್ನು ದಣಿಸಲಾರೆ. ಮೂರು
ದಿನಗಳ ತನಕ ಕಾದೆ. ನಾಲ್ಕನೇ ದಿನ ದಾರಿಯಲ್ಲಿ ಒಂದು ಹೆಣಸಿಕ್ಕಿತು. ವಿಚಾ
ರಿಸಿದಲ್ಲಿ ವಾಸಯ್ಯನು ದಿವಂಗತನಾದನೆಂದೂ, ವಾಚಿನ ಮುಳ್ಳು ಕೈಗೆ
ತಾಗಿ ವಿಷವೇರಿದುದರಿಂದ ಸತ್ತನೆಂದೂ, ತಿಳಿಯಿತು.

ಸತ್ತನಂತರ ಎಲ್ಲರ ಬಾಯಿಂದಲೂ ಕೇಳಿ ಬಂತು: "ವಾಸಯ್ಯನೇ
ವಾಚ್‌ಭಕ್ಷಕ! ನನ್ನ ವಾಚನ್ನು ಹಿಂದಿರುಗಿ ಕೊಡಲೇ ಇಲ್ಲ!''

ಸತ್ತ ದಿನವು ಎಷ್ಟು ಪುಣ್ಯಮಯ! ೧೯೩೯ನೇ ಸಪ್ಟಂಬರ ತಾ. ೨.
ಚೆಂಬರ್ಲೇನರು ಯುದ್ಧ ಸಾರಿದ ದಿನ! ಒಂದು ದಿನ ತಡವಾದರೆ, ಯುದ್ಧ
ಕಾಲದ ಬಹುಬೆಲೆಯ ವಾಚುಗಳನ್ನು ನುಂಗಿಯೋ ಪರಂಧಾಮವನ್ನೈದು
ತ್ತಿದ್ದ! ಅವನು ಸತ್ತ ಕೂಡಲೇ, ಶವ ಸಿಗಿದು ನೋಡಲಿಲ್ಲ. ನೋಡಿದ್ದರೆ,
ಅಜೀರ್ಣವಾಗಿ ನಿಂತ ಕೆಲವು ವಾಚುಗಳು ಸಿಗುತ್ತಿದ್ದವೇನೋ?

ಹೇಗೂ ಇರಲಿ, ಮನುಷ್ಯ ಪ್ರಾಮಾಣಿಕ. ಒಬ್ಬನನ್ನು ಭಕ್ಷಣೆಗೆ
ಪ್ರೇರಿಸುವವರು, ಭಕ್ಷಣೆಯ ವಸ್ತುಗಳನ್ನು ತಂದುಕೊಡುವವರೇ! ವಾಸ
ಯ್ಯನ ತಪ್ಪು ಇಲ್ಲ. ಅವನ ಆತ್ಮಕ್ಕೆ ಶಾಂತಿಯಿರಲಿ!

▪▪▪▪▪▪▪▪▪

## ೩. ಮರೆವು

ಡಾಕ್ಟರರು ಚಿಂತಾಮಗ್ನರಾಗಿ ಕುಳಿತಿದ್ದರು. ಅನೇಕ ವರ್ಷಗಳಿಂದ
"ತಕ್ಕ ವೇಳೆಯಲ್ಲಿ ತಕ್ಕ ಕೆಲಸಮಾಡುವವರು" ಎಂಬ ಹೆಸರು ಪಡೆದವರು.
ವಿಶೇಷವಾಗಿ, ಬೆಳಿಗ್ಗೆ ಒಂಭತ್ತಕ್ಕೆ ಏಳುವುದು, ಹತ್ತರೊಳಗೆ ಚೊಕ್ಕವಾಗಿ
ಕ್ಷೌರಮಾಡಿ, ಮಡಿಯುಡುಪುಗಳನ್ನು ಧರಿಸಿ, ತಲೆಯೂ ನಗುವಷ್ಟು
ಸುಂದರವಾಗಿ ಬಾಚಿ, ಮುಖದ ಮೇಲೂ ಮಂದಸ್ಮಿತ ಧರಿಸಿ, ಹತ್ತು
ಘಂಟೆಯ ಸೂರ್ಯನಷ್ಟೇ ಬೆಳ್ಳಗಾಗಿ ಹೊರಬಂದು, ಅಲ್ಲಿ ಕಾದಿರುವ

ಐದಾರು ಮಂದಿಯ ಕೈಗಳನ್ನು ಹಿಡಿದು, ನಾಲಿಗೆ ಹೊರ ಚಾಚಿಸಿ, ಎದೆ ಎಲುಬುಗಳಿಗೆ ಚಿಟಕಿ ಹೊಡೆದು, ಆ ಮೇಲೆ ಎರಡು ಕ್ಷಣ ಯೋಚನಾಪರರಾಗಿ, ಮತ್ತೆ ಥಕ್ಕನೆ ಮುಗುಳ್ನಗೆ ನಕ್ಕು, ಚಿಕ್ಕ ಕಾಗದದ ತುಂಡಿನಲ್ಲಿ ಮದ್ದು ಬರೆದು, ಬಾಟಲಿ ತುಂಬಿಸಿಕೊಟ್ಟು ಕಳಿಸುವುದು—ಇದೆಲ್ಲವನ್ನೂ ನಿರ್ವಹಿಸುವ ರೀತಿಯು ಚೊಕ್ಕದಾಗಿ ಕಾಣಿಸುತ್ತಿತ್ತು.

ಅನೇಕ ವೇಳೆ,—ಸ್ಥಳೀಯ ಭಜನಾ ಮಂಡಲಿಯ ಏಕಾಹ ಭಜನಾ ಮಂತಿಗೆಗಾಗಿ ಅಥವಾ ಅಖಿಲ ಭಾರತ ಖ್ಯಾತಿಯ ಪರಶುರಾಮ ಪರಡೀಕರರ ಸಂಗೀತದ ಮಂತಿಗೆಗಾಗಿ ಬಂದು ಕಾಯುವವರ ದಣಿದ ಕಪ್ಪು ಮುಖಗಳನ್ನು ಕಂಡು ರೋಗಿಗಳೆಂದು ಖಚಿತಮಾಡಿಕೊಂಡು, ನಾಲಿಗೆ ಹೊರ ಹಾಕಿಸಿ, ನಾಡಿ ನೋಡಿ, ಕಣ್ಣು ರೆಪ್ಪೆ ಎತ್ತಿ, ಇಣಿಕಿ, ಎದೆಗೂ ಬೆನ್ನಿಗೂ ನಳಿಗೆ ಚುಚ್ಚಿ, ದೀರ್ಘಶ್ವಾಸ ಎಳೆಸಿ,—ಆರು ತಿಂಗಳ ತನಕ ಅಲುಗಾಡದೆ ಹಾಸಿಗೆಯಲ್ಲಿರಲು ಅಪ್ಪಣೆಮಾಡಿದ ಉದಾಹರಣೆಗಳುಂಟು. ಮನೆಯಲ್ಲಿ ಯಾರೋ ಹಳೇ ಮೋಟಾರಿನ ಶಬ್ದ ತೆಗೆದು ಹಾಸಿಗೆಯಲ್ಲಿ ಚಡಪಡಿಸುತ್ತಿರುವರೆಂದು ವರದಿಮಾಡಲು ಬಂದರೆ, ವರದಿಮಾಡಿದವನಿಗೇ ಇಂಜೆಕ್ಷನ್ ಚುಚ್ಚಿ, "ಕೈ ಬಾತರೆ ಶಾಖ ಕೊಡಲು ಮರೆಯಬಾರದೆ"ಂದು ಬೋಧಿಸಿದ್ದುಂಟು. "ಜ್ವರ ಸ್ವಲ್ಪ ಹೆಚ್ಚಿದೆ, ಭೇದಿ ಎರಡು ಪಾಲಿದೆ" ಎಂದು ತಿಳಿಸಿದ ಕೆಲವರಿಗೆ, "ಇನ್ನು ಸ್ವಲ್ಪ ಗಂಜಿ ಮತ್ತು ಕಾಫಿ ಕೊಡಬಹುದು" ಎಂದು ಹೇಳಿದ್ದುಂಟು. ಸ್ನೇಹಿತರೊಡನೆ ಮಾತಾಡಿ ಕುಳಿತಿದ್ದಾಗ, ಇನ್ನೊಂದು ಪಕ್ಕದಲ್ಲಿ ರೋಗಿಯನ್ನು ಕುಳ್ಳಿರಿಸಿ, ನಾಲಿಗೆ ಹೊರಗೆ ಹಾಕು ಎಂದು ಹೇಳಿ ಅವನ ಕೈಯ ನಾಡಿ ಹಿಡಿದು, ಅರ್ಧ ತಾಸಿನ ತನಕ ಕೈಬಿಡದೆ,—ಆ ಅರ್ಧ ತಾಸೂ ಆ ಜೀವಿಯು ಒಂದು ಮಾನವಶ್ವಾನವೆನಿಸುವಂತೆ ನಾಲಿಗೆ ಹೊರಗೆ ಬಿಟ್ಟು, ನಾಲಿಗೆ ಒಳಗೆ ಎಳೆದುಕೊಳ್ಳುವ ಧೈರ್ಯವಿಲ್ಲದೆ ಕಣ್ಣುಗಳಿಂದ ನೀರಿಳಿಸುತ್ತಿರಲು, ಥಕ್ಕನೆ ಕೈಬಿಟ್ಟು ಮದ್ದು ಬರೆದು ಕಳಿಸಿದ್ದುಂಟು; ಆ ಮನುಷ್ಯನಿಗೆ ಬೇಗ ಗುಣವಾದ ದೃಷ್ಟಾಂತವೂ ಉಂಟು.

ಇತ್ತೀಚೆಗೆ ಅವರ ಮರೆವು ಹೆಚ್ಚಲಾರಂಭಿಸಿತ್ತು. ಹೊರ ಜಗತ್ತಿನೊಡನೆ ವ್ಯವಹರಿಸುವಾಗ ಅವರ ಮರೆವಿನಿಂದ ಇತರರಿಗೆ ವಿಪರೀತ ಪರಿಣಾಮವುಂಟಾದರೂ ಚಿಂತೆಯಿರಲಿಲ್ಲ. ಆದರೆ, ಸ್ವತಃ ತನ್ನ ಗೃಹಿಣಿಯ ಆಜ್ಞೆಗಳನ್ನು ಅವರು ಪೂರ್ಣವಾಗಿ ಯಾವಾಗಿನಿಂದ ಮರೆಯಲಾರಂಭಿಸಿ

ದರೋ ಅಂದಿನಿಂದ ಅವರ ಗೃಹಶಾಂತಿಯು ಕಡಿಮೆಯಾಗಿ, ಅವರ (ಡಾಕ್ಟರರ) ಮುಖದ ಮೇಲೆ ಕೆಲವು ನೂರು ನೆರಿಗೆಗಳಿದ್ದು ನಿಂತಿದ್ದುವು; ಇನ್ನೂ ಏಳುತ್ತಲೇ ಇದ್ದುವು. ಅವರ ಶ್ರೀಮತಿಯು ತನ್ನ ಗಂಡನ ಮೇಲೆ ಪೂರ್ಣ ಅವಿಶ್ವಾಸದ ಠರಾವು ಮಾಡಿದ್ದಳು. ಯಾವ ಕಾಹಿಲೆ ತನಗೆ ಬಂದರೂ ಸಾಕ್ಷಾತ್ ಪತಿಯಾದ ಇವರಿಂದ ಮಾತ್ರ ತಾನು ಒಂದು ತಟಕಾದರೂ ಔಷಧ ತೆಗೆದುಕೊಳ್ಳುವುದಿಲ್ಲವೆಂದು ಮನೆ ಕೊಠಡಿಯೊಳಗಿನ ದೇವರ ಪಠದ ಮುಂದೆ ನಿಂತಿದ್ದಾಗ ಒಮ್ಮೆ ಆಣೆಯಿಟ್ಟುಕೊಂಡಿದ್ದಳು. ಈ ದಿನ ಮಧ್ಯಾಹ್ನ, ಶ್ರೀಮತಿಯೊಡನೆ ಮರವೆಯ ವಿಷಯವಾಗಿ ಅರ್ಧ ತಾಸಿನ ವಾಗ್ಯುದ್ಧವಾಗಿ ಡಾಕ್ಟರರು ಊಟಮಾಡದೆ ಚಿಕಿತ್ಸಾಲಯಕ್ಕೆ ಬಂದಿದ್ದರು.

ಡಾಕ್ಟರರು ಚಿಂತಿಸುತಿದ್ದರು: "ಮರವೆಗೇನು ಔಷಧ? ತನ್ನ ಶ್ರೀಮತಿಯು ತಾಳ್ಮೆಗೆಡದಂತೆ ಎಲ್ಲವನ್ನೂ ಹೇಗೆ ನೆನಪಿಟ್ಟುಕೊಳ್ಳಲಿ?"

ಆಕಸ್ಮಿಕವಾಗಿ ಅವರ ಮೇಜಿನ ಮುಂದೆ ಒಂದು ತೆರೆ ಬಂದಂತಾಯಿತು. ಕಣ್ಣೆತ್ತಿ ನೋಡಿದರು:—ನೆರೆಮನೆಯ ಮೀನಾಕ್ಷಿ

"ಏನು?"— ಡಾಕ್ಟರರು ಕಣ್ಣುಗಳಿಂದಲೇ ಪ್ರಶ್ನಿಸಿದರು.

"ಡಾಕ್ಟರರೇ!"—ಮೀನಾಕ್ಷಿಯು, ಬಲು ಕಳವಳದಿಂದ ವಿವರಿಸಿದಳು: "ನಮ್ಮ ಯಜಮಾನರಿಗೆ ಕಾಯಿಲೆ."

"ಎಷ್ಟಿದೆ ಜ್ವರ?"

"ಜ್ವರವಿಲ್ಲ."

"ಹೊಟ್ಟೆನೋವು?"

"ಹೊಟ್ಟೆನೋವಿಲ್ಲ."

"ಉಳುಕು? ನೆಗಡಿ? ಗಂಟಲು ನೋವು? ತಲೆ ತಿರುಗುವುದು? ಎದೆಯೊಳಗೆ ಒತ್ತಿದಂತಾಗುವುದು? ಹಸಿವು ಕಡಿಮೆ? ಒಣ ಕೆಮ್ಮು? ಕಣ್ಣು ಬಿಳುಪೇರಿದೆ?..........."

"ಇಲ್ಲ."

"ಹಾಗಾದರೆ, ಅವರಿಗೆ ಕಾಯಿಲೆಯಿಲ್ಲ" - ಡಾಕ್ಟರರು ಉತ್ತರ ಕೊಟ್ಟು, ಒಂದು ನಿಟ್ಟುಸಿರು ಬಿಟ್ಟರು.

"ಡಾಕ್ಟರರೇ, ನಾನು ಹೆಚ್ಚಿಗೆ ಮಾತಾಡುವುದಿಲ್ಲ........"

"ಕೂಡದು."

"ಡಾಕ್ಟರರೇ, ಅವರ ಕಾಯಿಲೆಯೆಂದರೆ, ಬೇರೇನೂ ಇಲ್ಲ..........."

"ಇಲ್ಲವೆಂದು ನಾನು ಹೇಳಿಲ್ಲವೇ?"

"ಅವರು, ಈಗ ಹೇಳಿದ್ದನ್ನು ಇನ್ನೊಂದು ಗಳಿಗೆಯಲ್ಲಿ ಮರೆತು ಬಿಡುತ್ತಾರೆ—ಅದೇ ಕಾಯಿಲೆ:"

"ಹ್ಞೆ? ಮರೆತುಬಿಡುತ್ತಾರೆ?"

"ಅಹುದು. ನನಗೂ ಅವರಿಗೂ ಪ್ರತೀದಿನ ಜಗಳ."

"ಹ್ಞೆ? ಜಗಳ?''—ಡಾಕ್ಟರರಿಗೆ ವೈರ್ಘುವ್ಮೆಂದಿತು.

"ನೋಡಿ ಡಾಕ್ಟರರೇ, ಕಳೆದವಾರ ನಾನು, ಒಂದು ಸೇರು ತೊಗರಿ ಬೇಳೆ ತರುವಂತೆ ಅವರೊಡನೆ ಹೇಳಿದೆ. ರಾತ್ರಿಯಾದರೂ ಅವರು ಮನೆಗೆ ಮರಳಲಿಲ್ಲ. ಮರುದಿನ ಬೆಳಿಗ್ಗೆ ಒಂಭತ್ತಕ್ಕೆ ಬಂದರು. "ಏನಿದು?" ಎಂದು ಪ್ರಶ್ನಿಸಿದಾಗ, ಮರೆತು ರೈಲಿನಲ್ಲಿ ಕುಳಿತು ಮಂಜೇಶ್ವರಕ್ಕೆ ಹೋಗಿದ್ದೆ—ಎಂದು ಹೇಳಿದರು!"

"ಉಫ್!—" (ಡಾಕ್ಟರರ ಕಂಠ ಬಿಗಿದುಬಂತು.)

"ಮತ್ತೊಂದು ದಿನ, ಡಾಕ್ಟರರೇ, ಒಳ್ಳೇ ಅಕ್ಕಿಯ ಕ್ರಯ ಕೇಳಿಬನ್ನಿರಿ ಎಂದು ಹೇಳಿದ್ದೆ. ಅವರು ನೆಟ್ಟಗೆ ಒಬ್ಬ ಡಾಕ್ಟರರಲ್ಲಿಗೆ ಹೋಗಿ ತಮ್ಮ ಕಣ್ಣುಗಳನ್ನು ಪರೀಕ್ಷಿಸಿಕೊಂಡು ಬರಬೇಕೆ?"

"ಉಸ್ಸ್!"—(ಡಾಕ್ಟರರಿಗೆ ಉಬ್ಬಸ.)

"ಇನ್ನೊಂದು ದಿನ, ಮಗುವಿಗೆ ಕಾಯಿಲೆಯೆಂದು ಡಾಕ್ಟರರನ್ನು ಕರೆತರಲು ಹೇಳಿದಾಗ, ಓಡಿಹೋಗಿ, ತಮ್ಮ ವಕೀಲರೊಡನೆ, ಕೂಸಪ್ಪಯ್ಯನಿಗೆ ಈ ದಿನವೇ ರಿಜಿಸ್ಟ್ರಿನೋಟೀಸು ಕಳಿಸಬೇಕೆಂದು ಒತ್ತಾಯಪಡಿಸಿದರು!"

"ಹ್ಞಾ!" ಡಾಕ್ಟರರ ಸ್ವರವು ಕ್ಷೀಣವಾಗಿತ್ತು. ತಾನೂ ಇನ್ನು ಮುಂದೆ, ಮರೆವು ಹೆಚ್ಚಿ ಇದೇ ರೀತಿ ವರ್ತಿಸಿದರೆ?

ಮೀನಾಕ್ಷಮ್ಮ ಮುಂದುವರಿಸಿದಳು| "ಒಂದು ತಿಂಗಳ ಹಿಂದೆ, ಒಮ್ಮೆ, ಉಡುಪಿಗೆ ನೆಂಟರಲ್ಲಿಗೆ ಹೋಗಲು ಮೋಟಾರ್ ಟಿಕೇಟು ತನ್ನಿರೆಂದು ಕಳಿಸಿದಾಗ, ಸಾಯಂಕಾಲ ಆರಕ್ಕೆ ಮನೆಗೆ ಹಿಂದಿರುಗಿ, ಮೈದಾನಿನ ಕ್ರಿಕೆಟ್ ಪಂದ್ಯಾಟದ ವಿವರ ಕೊಟ್ಟರು."

"ಹೊಃ!"—(ಡಾಕ್ಟರರಿಂದ ಆರ್ತನಾದ.

"ನೋಡಿ!"—ಮೀನಾಕ್ಷಮ್ಮ ಹೇಳಿದಳು—"ಈ ದಿನ ಬೆಳಿಗ್ಗೆ ಸ್ನಾನಕ್ಕೆಂದು ಹೋದವರು, ಸ್ನಾನಮಾಡಿ ಬರುವಾಗ ಮೈ ಒರೆಸಬೇಕೆಂಬುದು ನೆನಪಿಲ್ಲದೆ, ಹಾಗೆಯೇ ಹೊರಬಂದಿದ್ದಾರೆ. ಇನ್ನು ನಾನು ತಡೆಯಲಾರೆ! ಹೇಳಿ—ಏನು ಮಾಡಲಿ?"

"ಅಹುದು, ಏನು ಮಾಡಲಿ?" ಪ್ರತಿಧ್ವನಿಸಿದರು ಡಾಕ್ಟರರು. ಅವರ ಮನಸ್ಸು ಅವರ ಮನೆಗೆ ನಡೆದು, ತಮ್ಮ ಕೆಲವು ಮರೆವಿನ ಮೋಜುಗಳಲ್ಲಿ ಸ್ನಾನಮಾಡುತಿತ್ತು.

"ಇನ್ನು ನಾನು, ಡಾಕ್ಟರರೇ........"

"ಕರೆದಿರಾ?"

"........'ಈ ರೀತಿ ಮಾಡಿರಿ' ಎಂದು ಬರೆದ ಬೋರ್ಡನ್ನು ಅವರ ಮುಖದ ಮುಂದೆ ಹಿಡಿದರೆ, ಮರೆತುಹೋಗದೆ ಸರಿಯಾಗಿ ನಡೆವರೋ ಎಂದೊಂದು ಆಸೆ."

"ನಿಜ!—ಸರಿ!—ನೂರಕ್ಕೆ ನೂರು ಒಪ್ಪು!" ಎಂದು ಕೂಗಾಡಿದರು ಡಾಕ್ಟರರು.

"ಏನಂದಿರಿ ಡಾಕ್ಟರರೇ?"

"ನಿಮ್ಮ ಯಜಮಾನರು ಸ್ನಾನ ಮುಗಿದು ಹೊರಗೆ ಬರುವ ಸಮಯಕ್ಕೆ ಸರಿಯಾಗಿ, 'ನಿಮ್ಮ ಮೈಯೊರಸಿಕೊಳ್ಳಿರಿ!' ಎಂದು ಬರೆದ ಒಂದು ದೊಡ್ಡ ಕಾಗದವನ್ನು ಅವರ ಮುಖದ ಮುಂದೆ ಹಿಡಿಯಿರಿ. ಆಗ ಏನು ಮಾಡುವರೆಂದು ನೋಡೋಣ!"—ಎಂದು ಸಲಹೆ ಕೊಟ್ಟರು ಡಾಕ್ಟರರು. ಮೀನಾಕ್ಷಿ ಎದ್ದುಹೋದಳು.

o o o o o

ಮರುದಿನ, ಮೀನಾಕ್ಷಿಯು, ಬೆಳಗ್ಗೆ ಎಂಟಕ್ಕೆ ಡಾಕ್ಟರರ ಮನೆಗೆ ಧಾವಿಸಿ ಬಂದಳು. ಡಾಕ್ಟರರ ಹೆಂಡತಿ, ಅವಳನ್ನು ಸ್ವಾಗತಿಸಿ, ಪ್ರಶ್ನಿಸಿದಳು. ಮೀನಾಕ್ಷಿ, ಕಣ್ಣಲ್ಲಿ ನೀರುತುಂಬಿ, ಅಂದಿನ ಪಂಚಾಂಗ ಓದಿದಳು: "ನೋಡಮ್ಮ, ನನ್ನ ಗಂಡನಿಗೆ ಮರೆವು ಜಾಸ್ತಿ. ಅದಕ್ಕಾಗಿ ನಿಮ್ಮ ಯಜಮಾನರ ಬಳಿಗೆ, ನಿನ್ನೆ ಸಲಹೆ ಕೇಳಲು ಬಂದಿದ್ದೆ. ದೊಡ್ಡ ಕಾಗದದ ಮೇಲೆ ಸೂಚನೆ ಬರೆದು, ನಮ್ಮವರ ಮುಖದ ಮುಂದೆ ಹಿಡಿಯಲು ಹೇಳಿದರು. ಈ ದಿನ ನಮ್ಮವರು ಸ್ನಾನಕ್ಕೆ ಹೋದಾಗ ಹಾಗೇ ಮಾಡಿದೆ.

ಆದರೇನು? ಅವರು, ನನ್ನ ಕೈಯಿಂದ ವಿನಯಪೂರ್ವಕವಾಗಿ ಆ ಸೂಚನಾ ಪತ್ರ ತೆಗೆದುಕೊಂಡು, ತನ್ನೊಂದಿಗೆ ಬ್ರೈರಾಸು ಇದೆಯೆಂಬ ನೆನಪಿಲ್ಲದೆ, ಕಾಗದದಿಂದಲೇ ಕರಕರನೆ ಮೈಯೊರಸಿಕೊಂಡರಮ್ಮ! ಇನ್ನಾರು ಗತಿ?"

—ಮೀನಾಕ್ಷಿ, ಹೇಳುತಿದ್ದಂತೆ, ಅಳುತಿದ್ದಳು. ಡಾಕ್ಟರರ ಹೆಂಡತಿಯ ಕಣ್ಣುಗಳು ಆಶ್ಚರ್ಯದಿಂದ ತೆರೆದೇ ಇದ್ದುವು. "ಸ್ನಾನ? ಕಾಗದ? ಏನೆಂದಿರಿ?" ಎಂದು ಪ್ರಶ್ನಿಸಿದಳು. ಮೀನಾಕ್ಷಿಯು, ಪುನಃ ವಿವರಿಸಿದಳು.

ಕೇಳುತ್ತ, ಡಾಕ್ಟರರ ಹೆಂಡತಿಗೆ ಕಣ್ಣು ಕತ್ತಲೆ ಬಂತು. ಮೀನಾಕ್ಷಿಯ ಕೈಹಿಡಿದು ತಾನು ಒಂದು ಕುರ್ಚಿಯ ಮೇಲೆ ಕುಳಿತಳು; ಇನ್ನೊಂದರಲ್ಲಿ ಮೀನಾಕ್ಷಿಗೆ ಕುಳ್ಳಿರಹೇಳಿದಳು. ಆ ಮೇಲೆ, ಗುರಿಯಿಲ್ಲದೆ ನೋಡಿ, ಒಂದೆರಡು ನಿಮಿಷಗಳ ಮೌನದ ನಂತರ, ಮೃದುವಾಗಿ "ಮೀನಾಕ್ಷಮ್ಮ!" ಎಂದಳು.

"ಏನು?"—ಮೀನಾಕ್ಷಿ ಕೇಳಿದಳು.

"ನನ್ನ ಕಥೆ ಕೇಳಮ್ಮ"—ಡಾಕ್ಟರರ ಹೆಂಡತಿ, ಮೃದುವಾಗಿಯೇ ಹೇಳಿದಳು. "ನಿಮ್ಮಂಥವರಿಗೆ ಸಲಹೆಕೊಡುವ ನಮ್ಮವರಿಗೂ ಕಾಯಿಲೆ. ನಿನ್ನೆ ನಿನ್ನ ಗಂಡನಿಗೆ ನಮ್ಮವರು ಚಿಕಿತ್ಸೆ ಹೇಳುವಾಗ, ಅವರಿಗೂ ಒಂದು ಚಿಕಿತ್ಸೆ ಹೊಳೆಯಿತೆಂದು ತೋರುವುದು. ಈ ದಿನ ಬೆಳಿಗ್ಗೆ ಸ್ನಾನಗೃಹಕ್ಕೆ ಹೋಗುವಾಗ, ಮೈಯೊರೆಸುವ ಬ್ರೈರಾಸಿನೊಂದಿಗೆ ಒಂದು ವೃತ್ತಪತ್ರಿಕೆಯನ್ನೂ ತೆಗೆದುಕೊಂಡು ಹೋದರು ನಮ್ಮವರು. ಸ್ನಾನವಾಗಿದ ಕೂಡಲೇ ವೃತ್ತಪತ್ರಿಕೆಯಿಂದ ಮೈಯೊರಸಿಕೊಂಡು, ಆ ಮೇಲೆ ಬ್ರೈರಾಸನ್ನು ಬಿಡಿಸಿ ಓದಲು ಆರಂಭಿಸಿದರು!....ಏನು, ಮೀನಾಕ್ಷಮ್ಮ, ಕಣ್ಣು ಮುಚ್ಚಿದಿರೇನು? ನಿದ್ದೆ ಬಂತೇ? ಹೇಳಿರಮ್ಮ, ಇಂತಹ ಮರೆವಿಗೆ ಮದ್ದೇನು?"

ಮೀನಾಕ್ಷಿ ಕಣ್ತೆರೆದು ಮೆಲ್ಲಗೆ ಹೇಳಿದಳು: "ಅವರಿಗೆ ಮರೆವು ಉಂಟೆಂಬುದನ್ನು ನಾವು ಮರೆತುಬಿಡುವುದು!"

ಡಾಕ್ಟರರ ಹೆಂಡತಿ ಒಪ್ಪಿದಳು.



Edited, Printed & Published by K. V. Shenoy
at The Prabhat Printers, Ltd., Mangalore.